ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 400
ವಿಧಾನ ಪರಿಷತ್ ಸದಸ್ಯರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 06.03.2020
ಉತ್ತರಿಸುವವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮುಖ್ಯಮಂತ್ರಿ ಗ್ರಾಮ ವಿಕಾಸ ಯೋಜನೆಯಲ್ಲಿ ತುಮಕೂರು ಜಿಲ್ಲೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಮುದ್ದೇನಹಳ್ಳಿ ಗ್ರಾಮ ಪಂಚಾಯತಿ ವ್ಯಾಪ್ತಿಯ ಸಾಲಕಟ್ಟೆ ಗ್ರಾಮಕ್ಕೆ ಯಾವ ವಿಧಾನ ಪರಿಷತ್ ಸದಸ್ಯರ ಅನುದಾನದಲ್ಲಿ ಕಾಮಗಾರಿ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಸರ್ಕಾರದ ಆದೇಶ ಸಂ:ಗ್ರಾಅಪ:10:ಗ್ರಾವಿಯೋ:17 ದಿ:20.06.2017 ರಂತೆ ಮುಖ್ಯಮಂತ್ರಿ ಗ್ರಾಮ ವಿಕಾಸ ಯೋಜನೆಯಡಿ ರಾಜ್ಯದ ಗ್ರಾಮೀಣ ವಿಧಾನಸಭಾ ಕ್ಷೇತ್ರದ ಶಾಸಕರು ಮತ್ತು ವಿಧಾನ ಪರಿಷತ್ ಸದಸ್ಯರು ಗ್ರಾಮಗಳನ್ನು ಆಯ್ಕೆ ಮಾಡಲು ಅವಕಾಶ ಕಲ್ಪಿಸಿದ್ದು, ಅದರಂತೆ ತುಮಕೂರು ಜಿಲ್ಲೆ, ಚಿ.ನಾ ಹಳ್ಳಿ ತಾಲ್ಲೂಕು, ಮುದ್ದೇನಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಸಾಲ್ಕಟ್ಟೆ ಗ್ರಾಮವನ್ನು ಶ್ರೀ ರಮೇಶ್‌ಬಾಬು, ಮಾನ್ಯ ವಿಧಾನ ಪರಿಷತ್ ಸದಸ್ಯರು (ಶಿಕ್ಷಕರ ಕ್ಷೇತ್ರ) (ಹಿಂದಿನ) ರವರು ಆಯ್ಕೆ ಮಾಡಿರುತ್ತಾರೆ. |
| ಆ) | ಸದರಿ ಯೋಜನೆಗೆ ಯಾವ ವರ್ಷ ಹಣ ಬಿಡುಗಡೆ ಮಾಡಲಾಗಿದೆ ಮತ್ತು ಸದರಿ ಕಾಮಗಾರಿ ಅಪೂರ್ಣವಾಗಿದ್ದಲ್ಲಿ ಕಾರಣಗಳೇನು; | ಸರ್ಕಾರ ನಿಗಧಿಪಡಿಸಿರುವಂತೆ ರೂ.100.00 ಲಕ್ಷ ಅನುದಾನದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂ: ಗ್ರಾಅಪ:21:ಗ್ರಾವಿಯೋ:17 ದಿ:31.08.2017 ರಲ್ಲಿ ಅನುಮೋದನೆ ನೀಡಲಾಗಿರುತ್ತದೆ.<br>• ಹಣ ಬಿಡುಗಡೆಗೆ ಸಂಬಂಧಿಸಿದ ಮಾಹಿತಿಯನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ.<br>• ಅನುದಾನದ ಲಭ್ಯತೆಯನ್ನು ಆಧರಿಸಿ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತಿದೆ. ಪ್ರಸ್ತುತ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಬಾಕಿ ಅನುದಾನವನ್ನು ಬಿಡುಗಡೆಗೊಳಿಸಿ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು. |
| ಇ) | ಸದರಿ ಯೋಜನೆಯನ್ವಯ ಅನುಮೋದನೆಗೊಂಡ ಕಾಮಗಾರಿಯನ್ನು ಬದಲಾಯಿಸಲಾಗಿದೆಯೇ; | ಅನುಮೋದನೆಗೊಂಡ ಕ್ರಿಯಾಯೋಜನೆಯಲ್ಲಿನ ಕೆಲವು ಕಾಮಗಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಬದಲಾವಣೆ ಮಾಡಲು ದಿ:16.10.2019 ರಂದು ಮಾನ್ಯ ಶಾಸಕರು, ಚಿ.ನಾ ಹಳ್ಳಿ ವಿಧಾನ ಸಭಾ ಕ್ಷೇತ್ರ ರವರ ಅಧ್ಯಕ್ಷತೆಯಲ್ಲಿ ನಡೆದ ಗ್ರಾಮ ವಿಕಾಸ ಯೋಜನೆ ಉಸ್ತುವಾರಿ ಸಮಿತಿ ಸಭೆಯಲ್ಲಿ ಅನುಮೋದನೆ ನೀಡಲಾಗಿರುತ್ತದೆ.<br>ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ:25:ಗ್ರಾವಿಯೋ:2016, ದಿನಾಂಕ:08.09.2016ರಲ್ಲಿ ತಿಳಿಸಿರುವಂತೆ ಮಾರ್ಗಸೂಚಿಯಲ್ಲಿ ನಿಗಧಿ ಪಡಿಸಿರುವ ಅಭಿವೃದ್ಧಿ ಕಾಮಗಾರಿಗಳನ್ನು ಗ್ರಾಮದ ಹಿತದೃಷ್ಟಿಯಿಂದ ಮಾರ್ಗಸೂಚಿಯಲ್ಲಿರುವ ಇನ್ನೊಂದು ಅಭಿವೃದ್ಧಿ ಕಾಮಗಾರಿಗೆ ಬದಲಾವಣೆ ಮಾಡಬೇಕಾದ ಸಂದರ್ಭದಲ್ಲಿ ಸ್ಥಳೀಯ ಶಾಸಕರ |

| | | |
|---|---|---|
| | | ಅಧ್ಯಕ್ಷತೆಯಲ್ಲಿರುವ ಯೋಜನಾ ಉಸ್ತುವಾರಿ ಸಮಿತಿಗೆ ಅನುಮೋದನೆ ನೀಡುವ ಅಧಿಕಾರ ನೀಡಲಾಗಿರುತ್ತದೆ. ಪ್ರತಿಯನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ. |
| ಈ) | ಬದಲಾಯಿಸಿದ್ದಲ್ಲಿ, ರಾಜ್ಯ ಸರ್ಕಾರದ ನಡವಳಿ ಸಂಖ್ಯೆ: ಗ್ರಾಅಪ:09:ಗ್ರಾವಿಯೋ:2017, ದಿನಾಂಕ:20.06.2017ರನ್ವಯ ಸಂಬಂಧಪಟ್ಟ ವಿಧಾನ ಪರಿಷತ್ ಸದಸ್ಯರ ಒಪ್ಪಿಗೆ ಪಡೆಯಲಾಗಿದೆಯೇ; | ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ:25:ಗ್ರಾವಿಯೋ:2016, ದಿನಾಂಕ:08.09.2016ರಲ್ಲಿ ತಿಳಿಸಿರುವಂತೆ ಮಾರ್ಗಸೂಚಿಯಲ್ಲಿ ನಿಗದಿ ಪಡಿಸಿರುವ ಅಭಿವೃದ್ಧಿ ಕಾಮಗಾರಿಗಳನ್ನು ಗ್ರಾಮದ ಹಿತದೃಷ್ಟಿಯಿಂದ ಮಾರ್ಗಸೂಚಿಯಲ್ಲಿರುವ ಇನ್ನೊಂದು ಅಭಿವೃದ್ಧಿ ಕಾಮಗಾರಿಗೆ ಬದಲಾವಣೆ ಮಾಡಬೇಕಾದ ಸಂದರ್ಭದಲ್ಲಿ ಸ್ಥಳೀಯ ಶಾಸಕರ ಅಧ್ಯಕ್ಷತೆಯಲ್ಲಿರುವ ಯೋಜನಾ ಉಸ್ತುವಾರಿ ಸಮಿತಿಗೆ ಅನುಮೋದನೆ ನೀಡುವ ಅಧಿಕಾರ ನೀಡಲಾಗಿರುತ್ತದೆ. ಅದರಂತೆ ಅಗತ್ಯತೆ/ಅವಶ್ಯಕತೆ ಮೇರೆಗೆ ಯೋಜನಾ ಉಸ್ತುವಾರಿ ಸಮಿತಿಯ ಸಭೆಯಲ್ಲಿ ತೀರ್ಮಾನಿಸಿ ಕಾಮಗಾರಿಗಳನ್ನು ಬದಲಾಯಿಸಲಾಗಿರುತ್ತದೆ. |
| ಉ) | ಸದರಿ ಗ್ರಾಮ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹಾಗೂ ತಾಲ್ಲೂಕು ಪಂಚಾಯತಿ ಅಧಿಕಾರಿಗಳು ನಿಯಮಾವಳಿಗೆ ವಿರುದ್ಧವಾಗಿ ಕಾಮಗಾರಿ ಬದಲಾಯಿಸಿರುತ್ತಾರೆಯೇ; | ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಮತ್ತು ತಾಲ್ಲೂಕು ಪಂಚಾಯಿತಿ ಅಧಿಕಾರಿಗಳು ನಿಯಮಾವಳಿಗಳ ವಿರುದ್ಧವಾಗಿ ಕಾಮಗಾರಿಗಳನ್ನು ಬದಲಾಯಿಸಿರುವ ಬಗ್ಗೆ ಸರ್ಕಾರದಲ್ಲಿ ಮಾಹಿತಿ ಸ್ವೀಕೃತಿಯಾಗಿರುವುದಿಲ್ಲ. |
| ಊ) | ಹಾಗಿದ್ದಲ್ಲಿ, ಅವರ ಮೇಲೆ ನಿಯಮಾನುಸಾರ ಯಾವ ಕ್ರಮ ಕೈಗೊಳ್ಳಲಾಗಿದೆ. | ಅಂತಹ ಪ್ರಸ್ತಾವನೆಗಳು ಸಕಾರದ ಮುಂದೆ ಇರುವುದಿಲ್ಲ. |

ಸಂ: ಗ್ರಾಅಪ/ 1/26/ಆರ್‌ಆರ್‌ಸಿ/2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

## ಅನುಬಂಧ-1

## ಮುಖ್ಯಮಂತ್ರಿ ಗ್ರಾಮ ವಿಕಾಸ ಯೋಜನೆಯ ಅನುದಾನ ಬಿಡುಗಡೆ

ರೂ.ಲಕ್ಷಗಳಲ್ಲಿ

| ಕ್ರ.ಸ | ಜಿಲ್ಲೆ | ವಿ.ಸ ಕ್ಷೇತ್ರ | ಆಯ್ಕೆಯಾದ ಗ್ರಾಮ | ನಿಗಧಿಪಡಿಸಿದ ಅನುದಾನ | ವರ್ಷವಾರು ಬಿಡುಗಡೆ | | | ಬಾಕಿ ಬಿಡುಗಡೆ |
|---|---|---|---|---|---|---|---|---|
| | | | | | 2018-19 | 2019-20 | ಒಟ್ಟು | |
| 1 | ತುಮಕೂರು | ಚಿಕ್ಕನಾಯಕನಹಳ್ಳಿ | ಸಾಲಕಟ್ಟೆ | 100.00 | 78.40 | 5.00 | 83.40 | 16.60 |

ಅನುಬಂಧ -2

ಕರ್ನಾಟಕ ಸರ್ಕಾರ

ಸಂಖ್ಯೆ:ಗ್ರಾಅಪ:25:ಗ್ರಾವಿಯೋ:2016

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 08.09.2016

## ಸುತ್ತೋಲೆ

ವಿಷಯ: ಗ್ರಾಮ ವಿಕಾಸ ಯೋಜನೆಯಡಿ ಮಾನ್ಯ ಶಾಸಕರ ಅಧ್ಯಕ್ಷತೆಯ ಯೋಜನಾ ಉಸ್ತುವಾರಿ ಸಮಿತಿಗೆ ಶಿಫಾರಸ್ಸು ಮಾಡಲಾದ ಅಧಿಕಾರಗಳ ಕುರಿತಂತೆ.

ಉಲ್ಲೇಖ: 1. ಗ್ರಾಮ ವಿಕಾಸ ಯೋಜನೆಯ ಪ್ರಗತಿ ಕುರಿತಂತೆ ಅಂದಾಜು ಸಮಿತಿ ಸಭೆ ದಿ:24.08.2016ರ ಶಿಫಾರಸ್ಸುಗಳು.
2. ಗ್ರಾಮ ವಿಕಾಸ ಯೋಜನೆ ಮಾರ್ಗಸೂಚಿ.

***

ಕರ್ನಾಟಕ ವಿಧಾನ ಮಂಡಲದ ನಡೆದ ಅಂದಾಜು ಸಮಿತಿಯು ದಿನಾಂಕ:24.08.2016ರಂದು ನಡೆಸಿದ ಸಭೆಯಲ್ಲಿ ಗ್ರಾಮ ವಿಕಾಸ ಯೋಜನೆಯ ಪ್ರಗತಿಯನ್ನು ಪರಿಶೀಲಿಸಿ, ಯೋಜನೆಯ ಪರಿಣಾಮಕಾರಿ ಹಾಗೂ ನಿಗಧಿತ ಸಮಯದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಆಯ್ಕೆಯಾದ ಗ್ರಾಮಗಳಲ್ಲಿ ಅಭಿವೃದ್ಧಿಪಡಿಸಿ ಯೋಜನೆಯ ಫಲಶ್ರುತಿ ಆ ಗ್ರಾಮದ ಜನರಿಗೆ ದೊರಕುವಂತೆ ಮಾಡಲು ಯೋಜನೆಯನ್ನು ಯಶಸ್ಸಿಗೊಳಿಸುವ ಹಿನ್ನಲೆಯಲ್ಲಿ ಹಾಗೂ ಗ್ರಾಮ ಪಂಚಾಯಿತಿಗಳು ಇನ್ನಷ್ಟು ಪರಿಣಾಮಕಾರಿಯಾಗಿ ಜನರಿಗೆ ಉತ್ತರದಾಯಿಯಾಗುವಂತೆ ಜವಾಬ್ದಾರಿಯುತವಾಗಿ ಮತ್ತು ಕಾಲಬದ್ಧವಾಗಿ ಕೆಲಸ ಕಾರ್ಯನಿರ್ವಹಿಸುವಂತೆ ಮಾಡಲು ಸಲಹೆ ನೀಡಿರುತ್ತದೆ. ಇದೇ ಅಭಿಪ್ರಾಯವನ್ನು ಹಾಗೂ ಸಲಹೆಯನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಇವರುಗಳ ಸಹ ಹಲವಾರು ಸಂದರ್ಭದಲ್ಲಿ ನೀಡಿರುತ್ತಾರೆ. ಈ ಹಿನ್ನಲೆಯಲ್ಲಿ ಗ್ರಾಮ ವಿಕಾಸ ಯೋಜನೆಯನ್ನು ನಿಗಧಿತ ಅವಧಿಯಲ್ಲಿ ಅನುಷ್ಠಾನ ಮಾಡುವ ಆಶಯದಿಂದ ಗ್ರಾಮ ವಿಕಾಸ ಮಾರ್ಗಸೂಚಿಯಲ್ಲಿ ಅವಕಾಶ ಕಲ್ಪಿಸಿರುವ ಶಾಸಕರ ಅಧ್ಯಕ್ಷತೆ ಉಸ್ತುವಾರಿ ಸಮಿತಿಗೆ ಈ ಕೆಳಕಂಡ ನಿರ್ಧಾರಗಳನ್ನು ಕೈಗೊಳ್ಳುವ ಬಗ್ಗೆ ಅವಕಾಶ ಕಲ್ಪಿಸಿದೆ.

1. ಗ್ರಾಮ ವಿಕಾಸ ಯೋಜನೆಯ ಮಾರ್ಗಸೂಚಿಯಲ್ಲಿ ನಿಗಧಿಪಡಿಸಿರುವ ಅಭಿವೃದ್ಧಿ ಕಾರ್ಯಕ್ರಮಗಳನ್ನು ಗ್ರಾಮದ ಹಿತದೃಷ್ಟಿಯಿಂದ ಮಾರ್ಗಸೂಚಿಯಲ್ಲಿರುವ ಇನ್ನೊಂದು ಅಭಿವೃದ್ಧಿ ಕಾಮಗಾರಿಗೆ ಬದಲಾವಣೆ ಮಾಡಬೇಕಾದ ಸಂದರ್ಭದಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿರುವ ಯೋಜನಾ ಉಸ್ತುವಾರಿ ಸಮಿತಿಗೆ ಅನುಮೋದನೆ ನೀಡುವ ಅಧಿಕಾರ ನೀಡಲಾಗಿದೆ.

2. ಗ್ರಾಮ ಪಂಚಾಯಿತಿಗಳು ಗ್ರಾಮ ವಿಕಾಸ ಯೋಜನೆಯ ಕ್ರಿಯಾ ಯೋಜನೆಗಳನ್ನು ಅನುಮೋದನೆ ನೀಡುವಾಗ ಮತ್ತು ಅನುಷ್ಠಾನ ಸಂಸ್ಥೆಗಳನ್ನು ಆಯ್ಕೆ ಮಾಡುವಾಗ ವಿಳಂಬವಾಗುವ ಸಂದರ್ಭದಲ್ಲಿ ಕ್ರಿಯಾ ಯೋಜನೆಯನ್ನು ಅನುಮೋದಿಸಲು ಮತ್ತು ಅನುಷ್ಠಾನ ಸಂಸ್ಥೆಗಳನ್ನು ಆಯ್ಕೆ ಮಾಡಲು ಶಾಸಕರ ಅಧ್ಯಕ್ಷತೆಯಲ್ಲಿರುವ ಯೋಜನಾ ಉಸ್ತುವಾರಿ ಸಮಿತಿಗೆ ಅಧಿಕಾರ ನೀಡಲಾಗಿದೆ.

3. ಗ್ರಾಮ ಪಂಚಾಯಿತಿಯ ಅಧ್ಯಕ್ಷರು ಯೋಜನೆಯ ಅನುದಾನವನ್ನು ಬಿಡುಗಡೆಗೊಳಿಸಲು ವಿಳಂಭಮಾಡಿದಂತಹ ಸಂದರ್ಭದಲ್ಲಿ ಸದರಿ ಪ್ರಕರಣಗಳನ್ನು ಶಾಸಕರ ಅಧ್ಯಕ್ಷತೆಯ ಯೋಜನಾ ಉಸ್ತುವಾರಿ ಸಮಿತಿಯು ಗ್ರಾಮ ಪಂಚಾಯಿತಿಯ ಅಧ್ಯಕ್ಷರಿಗೆ ಹಣ ಪಾವತಿ ಮಾಡಲು ಗರಿಷ್ಠ 7 ದಿನಗಳ ಒಳಗೆ ದಿನಾಂಕವನ್ನು ಗೊತ್ತುಪಡಿಸಲು ಹಾಗೂ

- ಶಾಸಕರ ಅಧ್ಯಕ್ಷತೆಯ ಯೋಜನಾ ಅನುಮೋದನಾ ಸಮಿತಿಯು ಶಿಫಾರಸ್ಸಿನಂತೆ ಸಿದ್ಧಪಡಿಸಿದ 7 ದಿನಗಳೊಳಗೆ ಹಣ ಪಾವತಿ ಮಾಡಲು ಗ್ರಾಮ ಪಂಚಾಯತಿಯ ಅಧ್ಯಕ್ಷರು ವಿಳಂಭ ಮಾಡಿದ್ದಲ್ಲಿ ಅಂತಹ ಪಂಚಾಯಿತಿಗೆ ಸಂಬಂಧಿಸಿದಂತೆ ಗ್ರಾಮ ವಿಕಾಸ ಯೋಜನೆಯ ಅನುದಾನವನ್ನು ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಜಂಟಿಯಾಗಿ ಸಹಿ ಮಾಡಲು ಅವಕಾಶ ಕಲ್ಪಿಸಲಾಗಿದೆ.

8/9/16

(ಬೂವನಹಳ್ಳಿನಾಗರಾಜ್)
ನಿರ್ದೇಶಕರು (ಸುಗ್ರಾಯೋ) ಹಾಗೂ
ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

ಪ್ರತಿಯನ್ನು ಕ್ರಮಕ್ಕಾಗಿ.

1. ರಾಜ್ಯದ ಎಲ್ಲಾ ಮಾನ್ಯ ವಿಧಾನಸಭಾ ಸದಸ್ಯರುಗಳಿಗೆ.
2. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು.
3. ಮುಖ್ಯ ಇಂಜಿನಿಯರ್, ಪಂ ರಾಜ್ ಇಂಜಿನಿಯರಿಂಗ್ ವಿಭಾಗ, ಗ್ರಾಮೀಣಾಭಿವೃದ್ಧಿ ಭವನ, ಆನಂದರಾವ್ ವೃತ್ತ, ಬೆಂಗಳೂರು.
4. ವ್ಯವಸ್ಥಾಪಕ ನಿರ್ದೇಶಕರು, ಕೆಆರ್‌ಐಡಿಎಲ್, ಗ್ರಾಮೀಣಾಭಿವೃದ್ಧಿ ಭವನ, ಆನಂದರಾವ್ ವೃತ್ತ, ಬೆಂಗಳೂರು.
5. ಎಲ್ಲಾ ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿಗಳು (ಸಂಬಂಧಪಟ್ಟ ಗ್ರಾಮ ಪಂಚಾಯಿತಿಯ ಅಧ್ಯಕ್ಷರು/ಪಂಚಾಯತಿ ಅಭಿವೃದ್ಧಿಯ ಅಧಿಕಾರಿಗಳು / ಕಾರ್ಯದರ್ಶಿ ಗೆ ಪ್ರತಿಯನ್ನು ಮಾಹಿತಿಗೆ ತಲುಪಿಸುವುದು)
6. ಸಂಪಾದಕರು, ಕರ್ನಾಟಕ ವಿಕಾಸ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ, ಬೆಂಗಳೂರು ಇವರಿಗೆ ಪ್ರಕಟಣೆಗಾಗಿ.
7. ಮುಖ್ಯಸ್ಥರು, ಗಣಕ ಕೋಶ, ಗ್ರಾ ಮತ್ತು ಪಂ.ರಾಜ್ ಇಲಾಖೆ. ಇವರಿಗೆ ವೈಬ್‌ಸೈಟ್‌ನಲ್ಲಿ ಅಳವಡಿಸಲು.

ಪ್ರತಿಯನ್ನು ಮಾಹಿತಿಗಾಗಿ.

1. ಮಹಾಲೇಖಪಾಲರು (ಆಡಿಟ್-I & II), ಬೆಂಗಳೂರು.
2. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಪ್ರಧಾನ ಕಾರ್ಯದರ್ಶಿ (ಪಂ.ರಾಜ್) ಗಳ ಆಪ್ತ ಕಾರ್ಯದರ್ಶಿಗಳು, ಗ್ರಾ.ಅ.& ಪಂ.ರಾಜ್ ಇಲಾಖೆ.
4. ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾ ಮತ್ತು ಪಂ ರಾಜ್ ಇಲಾಖೆ.
5. ರಕ್ಷ ಕಡತಕ್ಕೆ / ಹೆಚ್ಚುವರಿ ಪ್ರತಿ.